## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 542 |
| 2.. | ಸದಸ್ಯರ ಹೆಸರು | : | ಶ್ರೀ ಜಿ. ರಘು ಆಚಾರ್,<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3. | ಉತ್ತರಿಸುವ ದಿನಾಂಕ | : | 24-09-2020 |
| 4. | ಉತ್ತರಿಸುವವರು | : | ಮುಖ್ಯಮಂತ್ರಿಗಳು |

| ಕ್ರ ಸಂ | ಪ್ರಶ್ನೆ | ಉತ್ತರಗಳು (ಕನ್ನಡ ಭಾಷೆಯಲ್ಲಿ) |
|---|---|---|
| ಅ) | ಬೃಹತ್ ಬೆಂಗಳೂರು ನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ರಸ್ತೆಗಳು ಹದಗೆಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಹಾಗಿದ್ದಲ್ಲಿ, ಅದರ ನಿರ್ವಹಣೆಗೆ ಕೈಗೊಂಡಿರುವ ಕ್ರಮಗಳೇನು; (ಮಾಹಿತಿ ಒದಗಿಸುವುದು) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ 08 ವಲಯಗಳಾದ ದಕ್ಷಿಣ ವಲಯ, ಪಶ್ಚಿಮ ವಲಯ, ಪೂರ್ವ ವಲಯ, ಮಹದೇವಪುರ ವಲಯ, ಯಲಹಂಕ ವಲಯ, ರಾಜರಾಜೇಶ್ವರಿ ನಗರ ವಲಯ, ದಾಸರಹಳ್ಳಿ ವಲಯ, ಬೊಮ್ಮನಹಳ್ಳಿ ವಲಯಗಳಲ್ಲಿರುವ ಉಪ ವಿಭಾಗ ಮತ್ತು ವಿಭಾಗದ ರಸ್ತೆ ಗುಂಡಿಗಳನ್ನು ತುರ್ತಾಗಿ ಮುಚ್ಚಲಾಗಿದ್ದು, ಸಾರ್ವಜನಿಕರ ಹಾಗೂ ಸುಗಮ ವಾಹನ ಸಂಚಾರಕ್ಕೆ ಅನುವು ಮಾಡಿ ಕೊಡಲಾಗಿದೆ.<br><br>ಪಾಲಿಕೆಯ ವ್ಯಾಪ್ತಿಯಲ್ಲಿ ಬರುವ ರಸ್ತೆ ಮುಲಭೂತ ಸೌಕರ್ಯ ಶಾಖೆಯಿಂದ ಈ ಕೆಳಕಂಡ ಮಾದರಿಯಲ್ಲಿ ರಸ್ತೆ ನಿರ್ವಹಣೆ ಕ್ರಮಗಳನ್ನು ಕೈಗೊಳ್ಳಲಾಗಿದೆ.<br><br>1. ಆರ್ಟೀರಿಯಲ್, ಸಬ್-ಆರ್ಟೀರಿಯಲ್ ಮತ್ತು ಇತರೆ ಪ್ರಮುಖ ರಸ್ತೆಗಳಲ್ಲಿ ಕಳೆದ ಮೂರು ವರ್ಷಗಳಿಂದೀಚೆಗೆ ಡಾಂಬರೀಕರಣ ಮಾಡಿರುವ ರಸ್ತೆ ಭಾಗಗಳನ್ನು ನಿರ್ವಹಣಾ ಮತ್ತು ಲೋಪ ಬಾದ್ಯತಾ ಅವಧಿಯಲ್ಲಿನ ರಸ್ತೆಗಳೆಂದು ಪರಿಗಣಿಸಿ, ಈ ರಸ್ತೆ / ಭಾಗಗಳಲ್ಲಿ ಉಂಟಾಗಿರುವ / ಉಂಟಾಗುವ ರಸ್ತೆ ಗುಂಡಿಗಳನ್ನು ಮತ್ತು ಮೇಲ್ಮೈ ದುರಸ್ಥಿಯನ್ನು ಸಂಬಂಧಪಟ್ಟ ಗುತ್ತಿಗೆದಾರರಿಂದಲೇ ಅವರ ವೆಚ್ಚದಲ್ಲಿಯೇ ದುರಸ್ಥಿಯನ್ನು ಕೈಗೊಳ್ಳಲಾಗುತ್ತಿದೆ. |

2. ನಿರ್ವಹಣಾ ಮತ್ತು ಲೋಪ ಬಾಧ್ಯತಾ ಅವಧಿಯಲ್ಲಿ ಇಲ್ಲದೇ ಇರುವ ಸುಮಾರು 180 ಕಿ.ಮೀ ಆರ್ಟರಿಯಲ್, ಸಬ್-ಆರ್ಟರಿಯಲ್ ಮತ್ತು ಇತರೆ ಪ್ರಮುಖ ರಸ್ತೆಗಳನ್ನು ವಾರ್ಷಿಕ ನಿರ್ವಹಣೆ ಗುತ್ತಿಗೆ ಆಧಾರದಲ್ಲಿ ಮೆಕ್ಯಾನಿಕಲ್ ಪಾಟ್ ಹೋಲ್ ಫಿಲ್ಲಿಂಗ್ ಯಂತ್ರದ (ಪೈಥಾನ್ ಯಂತ್ರ) ಮೂಲಕ ದುರಸ್ಥಿ ಕೈಗೊಳ್ಳಲಾಗುತ್ತಿದೆ.
3. ನಿರ್ವಹಣಾ ಮತ್ತು ಲೋಪ ಬಾಧ್ಯತಾ ಅವಧಿಯಲ್ಲಿ ಇಲ್ಲದೇ ಇರುವ ಇತರೆ ಆರ್ಟರಿಯಲ್, ಸಬ್-ಆರ್ಟರಿಯಲ್ ಮತ್ತು ಇತರೆ ಪ್ರಮುಖ ರಸ್ತೆಗಳಲ್ಲಿನ ರಸ್ತೆ ಗುಂಡಿ ಮತ್ತು ಹಾಳಾದ ರಸ್ತೆ ಮೇಲ್ಮೈಯನ್ನು ಪಾಲಿಕೆ ವತಿಯಿಂದ ಸ್ಥಾಪಿಸಲಾಗಿರುವ ಡಾಂಬರು ಮಿಶ್ರಣ ಘಟಕ (ಬ್ಯಾಚ್‌ಮಿಕ್ಸ್ ಪ್ಲಾಂಟ್)ದ ಮುಖಾಂತರ ದುರಸ್ತಿ ಕೈಗೊಳ್ಳಲಾಗುತ್ತಿದೆ.

ಇ) ಕಳೆದ 2 ವರ್ಷಗಳಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರಸ್ತೆಗಳ ಪ್ಯಾಚ್ ವರ್ಕ್‌ಗೆ ಮೀಸಲಿಟ್ಟ ಅನುದಾನ ಎಷ್ಟು; ಅದರಲ್ಲಿ ಖರ್ಚು ಮಾಡಲಾದ ಅನುದಾನ ಎಷ್ಟು? (ಮಾಹಿತಿ ಒದಗಿಸುವುದು)

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರಸ್ತೆಗಳ ಪ್ಯಾಚ್ ವರ್ಕ್‌ಗೆ 2 ವರ್ಷಗಳ ಅವಧಿಗೆ ಮೀಸಲಿಟ್ಟ ಅನುದಾನ ಮತ್ತು ಖರ್ಚು ಮಾಡಲಾದ ಅನುದಾನದ ವಿವರಗಳನ್ನು ವಲಯವಾರು ಈ ಕೆಳಕಂಡಂತೆ ವಿವರಿಸಲಾಗಿದೆ.

| ವಲಯ | 2018-19 | | 2019-20 | |
|---|---|---|---|---|
| | ಮೀಸಲಿಟ್ಟಿರುವ ಅನುದಾನ (ರೂ. ಲಕ್ಷಗಳಲ್ಲಿ) | ಖರ್ಚು ಮಾಡಲಾದ ಮೊತ್ತ (ರೂ. ಲಕ್ಷಗಳಲ್ಲಿ) | ಮೀಸಲಿಟ್ಟಿರುವ ಅನುದಾನ (ರೂ. ಲಕ್ಷಗಳಲ್ಲಿ) | ಖರ್ಚು ಮಾಡಲಾದ ಮೊತ್ತ (ರೂ. ಲಕ್ಷಗಳಲ್ಲಿ) |
| ದಕ್ಷಿಣ | 880.00 | 717.40 | 880.00 | ಕಾಮಗಾರಿಗಳು ಪ್ರಗತಿಯಲ್ಲಿದ್ದು, ಈವರೆವಿಗೂ ಯಾವುದೇ ಖರ್ಚು ಮಾಡಿರುವುದಿಲ್ಲ. |
| ಪಶ್ಚಿಮ | 802.00 | 635.00 | 685.00 | 10.00 |
| ಪೂರ್ವ | 910.00 | 910.00 | 910.00 | ಕಾಮಗಾರಿಗಳು ಪ್ರಗತಿಯಲ್ಲಿದ್ದು, ಈವರೆವಿಗೂ ಯಾವುದೇ ಖರ್ಚು ಮಾಡಿರುವುದಿಲ್ಲ. |

| | | | | | | |
|---|---|---|---|---|---|---|
| | | ಮಹದೇವಪುರ | 300.00 | 230.92 | 337.00 | 219.83 |
| | | ಯಲಹಂಕ | 95.00 | 94.00 | 75.00 | ಕಾಮಗಾರಿಗಳು ಪ್ರಗತಿಯಲ್ಲಿದ್ದು, ಈವರೆವಿಗೂ ಯಾವುದೇ ಖರ್ಚು ಮಾಡಿರುವುದಿಲ್ಲ. |
| | | ರಾಜರಾಜೇಶ್ವರಿ ನಗರ | 3.90 | 3.90 | 3.60 | ಕಾಮಗಾರಿಗಳು ಪ್ರಗತಿಯಲ್ಲಿದ್ದು, ಈವರೆವಿಗೂ ಯಾವುದೇ ಖರ್ಚು ಮಾಡಿರುವುದಿಲ್ಲ. |
| | | ದಾಸರಹಳ್ಳಿ | 92.43 | 92.43 | 114.07 | 114.07 |
| | | ಬೊಮ್ಮನಹಳ್ಳಿ | 470.00 | 445.27 | 480.00 | ಕಾಮಗಾರಿಗಳು ಪ್ರಗತಿಯಲ್ಲಿದ್ದು, ಈವರೆವಿಗೂ ಯಾವುದೇ ಖರ್ಚು ಮಾಡಿರುವುದಿಲ್ಲ. |
| | | ರಸ್ತೆ ಮೂಲಭೂತ ಸೌಕರ್ಯ | 2200.00 | 1242.00 | 1413.00 | 1243.87 |
| | | | **5753.33** | **4370.92** | **4897.67** | **1587.77** |

**ಸಂಖ್ಯೆ: ನಅಇ 192 ಎಂಎನ್‌ವೈ 2020**

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ